# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ (ಪದವೀದರರ ಕ್ಷೇತ್ರ)
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1344
ಪ್ರಶ್ನೆಗೆ ಉತ್ತರಿಸುವ ಸಚಿವರು : ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು
ಉತ್ತರಿಸಬೇಕಾದ ದಿನಾಂಕ : 21.12.2018

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೆಂಪೇಗೌಡ ಪ್ರಾಧಿಕಾರದ ರಚನೆ ಆದದ್ದು ಯಾವಾಗ; | ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಆರ್‌ಇಹೆಚ್ 2016, ದಿನಾಂಕ: 14.10.2016 ರನ್ವಯ ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಗಿರುತ್ತದೆ. |
| ಆ | ಇದಕ್ಕಾಗಿ ಈವರೆಗೆ ಬಿಡುಗಡೆಯಾಗಿರುವ ಹಣ ಎಷ್ಟು; | ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2016-17 ನೇ ಸಾಲಿನಲ್ಲಿ ರೂ.250.00 ಲಕ್ಷಗಳನ್ನು ಹಾಗೂ 2017-18 ನೇ ಸಾಲಿನಲ್ಲಿ ರೂ.125.00 ಲಕ್ಷಗಳು ಒಟ್ಟಾರೆ ಈವರೆಗೆ ರೂ. 375.00 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ. |
| ಇ | ಕೆಂಪೇಗೌಡ ಪ್ರಾಧಿಕಾರದ ಧ್ಯೇಯ ಮತ್ತು ಉದ್ದೇಶಗಳೇನು; | ಬೆಂಗಳೂರು ನಗರದಲ್ಲಿ ಮತ್ತು ಸುತ್ತಮುತ್ತಲಲ್ಲಿ ಬೆಂಗಳೂರು ಕಂದಾಯ ವಿಭಾಗದ ಗ್ರಾಮಾಂತರ, ಚಿಕ್ಕಬಳ್ಳಾಪುರ, ರಾಮನಗರ ಮತ್ತು ತುಮಕೂರು ಜಿಲ್ಲೆಗಳಲ್ಲಿನ ನಾಡಪ್ರಭು ಕೆಂಪೇಗೌಡ ಪಾರಂಪರಿಕ ತಾಣಗಳು, ಪ್ರವಾಸೋದ್ಯಮ ಸ್ಥಳಗಳು ಮತ್ತು ಸ್ಮಾರಕಗಳನ್ನು ಅಂತರ ರಾಷ್ಟ್ರೀಯ ಪಾರಂಪರಿಕ, ಸಾಂಸ್ಕೃತಿಕ ಮತ್ತು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿಪಡಿಸುವುದು. |
| ಈ | ನಾಡಪ್ರಭು ಕೆಂಪೇಗೌಡರ ಸಮಾಧಿಯನ್ನು ಅಭಿವೃದ್ಧಿಪಡಿಸಲು ಇನ್ನು ಎಷ್ಟು ಕಾಲಾವಕಾಶ ಬೇಕು | ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನಲ್ಲಿ ನಾಡಪ್ರಭು ಕೆಂಪೇಗೌಡರ ಸಮಾಧಿ ಸ್ಥಳವನ್ನು ಅಭಿವೃದ್ಧಿಪಡಿಸಲು ನಿರ್ಣಯಿಸಲಾಗಿದೆ. ಸಮಾಧಿ ಸ್ಥಳವನ್ನು ಅಭಿವೃದ್ಧಿಪಡಿಸಲು ಸಮಾಧಿಯ ಅಕ್ಕ ಪಕ್ಕದ 4-24 ಎ/ಗು ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಬೇಕಾಗಿರುವುದರಿಂದ, ಅಗತ್ಯ ಜಮೀನನ್ನು ಭೂಸ್ವಾಧೀನಪಡಿಸಿಕೊಂಡು ನಂತರ ಅನುದಾನದ ಲಭ್ಯತೆಗನುಗುಣವಾಗಿ ಸಮಾಧಿ ಸ್ಥಳವನ್ನು ಅಭಿವೃದ್ಧಿಪಡಿಸಲು ನಿಯಮಾನುಸಾರ ಕ್ರಮ ವಹಿಸಲಾಗುವುದು. |

ಮು.ತಿ.ನೋ..

| | | |
|---|---|---|
| ಉ | ಇದನ್ನು ಅಭಿವೃದ್ಧಿಪಡಿಸಲು ಇರುವ ಅಡಚಣೆಗಳೇನು | ಕ್ರಮಾಂಕ ಈ ನಲ್ಲಿ ಉತ್ತರಿಸಲಾಗಿದೆ. |

**ಸಂಖ್ಯೆ: ಕಂಇ 105 ಆರ್‌ಇಹೆಚ್ 2018**

**(ಆರ್.ವಿ. ದೇಶಪಾಂಡೆ)**
ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು